# ನಾನು ದೊಡ್ಡವನೋ ಸಣ್ಣವನೋ? ಅಥವಾ ಏನೂ ಅಲ್ಲವೋ?

**- ನೇಮರಾಮ್ ಚೌಧರಿ**

-----------------------------------

ಕಿಶೋರಾವಸ್ಥೆ ಎಂದರೆ ಆರೋಗ್ಯ, ಬೆಳವಣಿಗೆ ಮತ್ತು ಹಕ್ಕುಗಳ ಬಗ್ಗೆ ತಿಳಿದುಕೊಳ್ಳಲು ಪ್ರಯತ್ನಿಸುವ ಹಾಗೂ ಜ್ಞಾನ ಮತ್ತು ಕೌಶಲಗಳನ್ನು ಬೆಳೆಸಿಕೊಳ್ಳುವ ಸಮಯ. ಇದು ತಮ್ಮ ಭಾವನೆಗಳನ್ನು ನಿಯಂತ್ರಿಸಲು ಕಲಿಯುವ ಹಾಗೂ ಭವಿಷ್ಯದ ಬದುಕಿನ ತಯಾರಿಗೋಸ್ಕರ ಸಂಬಂಧಗಳನ್ನು ನಿಭಾಯಿಸಲು ಕಲಿಯುವ ಸಮಯ ಕೂಡ ಹೌದು. ಈ ವಯಸ್ಸಿನ ಹುಡುಗ ಹುಡುಗಿಯರಿಗೆ ಸರಿಯಾದ ಮಾರ್ಗದರ್ಶನ ಹಾಗೂ ಭಾವನಾತ್ಮಕ ಪ್ರೋತ್ಸಾಹದ ಅಗತ್ಯವಿರುತ್ತದೆ. ಮನಃಶಾಸ್ತ್ರಜ್ಞರ ಪ್ರಕಾರ ಮಕ್ಕಳಿಗೆ ಕಿಶೋರಾವಸ್ಥೆಯ ಬಗ್ಗೆ ಅರಿವು ನೀಡಬೇಕು, ಆದರೆ ಇನ್ನೊಂದು ಕಡೆ ನಮ್ಮ ಸಮಾಜದ ಬಹು ದೊಡ್ಡ ಭಾಗ ಇಂಥ ವಿಷಯಗಳನ್ನು ಮಡಿವಂತಿಕೆಯಿಂದ ನೋಡುತ್ತದೆ ಹಾಗು ಕಿಶೋರಾವಸ್ಥೆಯಲ್ಲಾಗುವ ಶಾರೀರಕ ಬದಲಾವಣೆಗಳು ಮತ್ತು ಭಾವನಾತ್ಮಕ ಮಗ್ನುಲಿನ ಬಗ್ಗೆ ಮಾತನಾಡಲು ಇಚ್ಛಿಸದೇ ಸುಮ್ಮನಿರುವುದಕ್ಕೆ ಪ್ರಾಶಸ್ತ್ಯ ನೀಡುತ್ತದೆ. ಇದು ಬಹಳ ಸವಾಲಿನ ವಿಷಯವಾಗಿದ್ದು ಇದಕ್ಕೆ ಸಂಬಂಧಿಸಿದಂತೆ ನನಗೆ ಶಾಲೆಯಲ್ಲಿ ಕಲಿಸುವಾಗ ಕೊಂಚ ಅನುಭವವಾಗಿದೆ. ಕಳೆದ 5-6 ವರ್ಷಗಳಿಂದ, ನಾನು ಅಂತರ್ಗತ ಶಾಲಾ ಶಿಕ್ಷಣದ ಕ್ಷೇತ್ರದಲ್ಲಿ ಕಲಿಸುವಲ್ಲಿ ಭಾಗಿಯಾಗಿದ್ದೇನೆ. ಈ ಕಾಲಾವಧಿಯಲ್ಲಿ ನಾನು ಮುಖ್ಯವಾಗಿ 11 ರಿಂದ 15 ವರ್ಷ ವಯಸ್ಸಿನವರೆಗಿನ ಗ್ರಾಮೀಣ ಹಿನ್ನೆಲೆಯ ಮಕ್ಕಳೊಡನೆ ಕೆಲಸ ಮಾಡಿದ್ದೇನೆ. ಸುಮಾರು ನಾಲ್ಕು ವರ್ಷಗಳ ಹಿಂದೆ ನಾನು ಏಳನೇ ತರಗತಿಗೆ ಪುರುಷ ಹಾಗೂ ಸ್ತ್ರೀ ಸಂತಾನೋತ್ಪತ್ತಿ ವ್ಯವಸ್ಥೆಯ ಬಗ್ಗೆ ಪಾಠ ಮಾಡಬೇಕಿತ್ತು. ಈ ವಿಷಯದ ಪಾಠ ಯೋಜನೆ ತಯಾರಿಸುವಾಗ ನನಗೆ ಸ್ವಲ್ಪ ಗೊಂದಲವುಂಟಾಯಿತು. ನನ್ನ ಕಾಳಜಿಯೇನಿತ್ತೆಂದರ, ಮಾನವ ದೇಹದ ಬಗ್ಗೆ ಒಂದು ಸಾಮಾನ್ಯ ತಿಳಿವಳಿಕೆ ಇರದ ಈ ಮಕ್ಕಳಿಗೆ ಸಂತಾನೋತ್ಪತ್ತಿ ವ್ಯವಸ್ಥೆಯ ಬಗ್ಗೆ ಕಲಿಸುವುದು ಸಾಧ್ಯವೇ? ಎಂದು. ಎರಡನೆಯದಾಗಿ, ಈ ಮಕ್ಕಳಿಗೆ ಈ ವಿಷಯದ ಬಗ್ಗೆ ಚರ್ಚೆ ಮಾಡಲು ಮುಜುಗರವಾಗುವುದಿಲ್ಲವೇ ಎಂಬ ಪ್ರಶ್ನೆಯೂ ಇತ್ತು. ಒಂದೆರಡು ದಿನಗಳನ್ನು ದ್ವಂದ್ವ ಮನಸ್ಥಿತಿಯಲ್ಲೇ ಕಳೆದ ಅನಂತರ ನಾನು ಗ್ರಂಥಾಲಯದಿಂದ ಬಿಟಿಯಾ ಕರೇ ಸವಾಲ್ (ಮಗಳು ಪ್ರಶ್ನೆ ಕೇಳುವಳು) ಎಂಬ ಒಂದು ಪುಸ್ತಕವನ್ನು ತರಿಸಿಕೊಂಡೆ. ಈ ಪುಸ್ತಕದ ಆರಂಭಿಕ ಅಧ್ಯಾಯಗಳ ತುಂಬ ಮಕ್ಕಳು ಸ್ವತಂತ್ರವಾಗಿ ಓದಿಕೊಳ್ಳಬಹುದಾದ ಮಾಹಿತಿ ಇದ್ದವು. ಇದರಲ್ಲಿದ್ದ ಒಂದು ಒಳ್ಳೆ ಅಂಶವೇನೆಂದರೆ ಈ ಓದಿನ ಸಾಮಗ್ರಿಯು ಮಕ್ಕಳ ಮನಸ್ಸಿನಲ್ಲಿ ಕೆಲವು ಪ್ರಶ್ನೆಗಳನ್ನು ಹುಟ್ಟುಹಾಕಿ ಅವುಗಳ ಬಗ್ಗೆ ಒಂದು ಮಟ್ಟದ ಮಾಹಿತಿಯನ್ನು ಕೂಡ ಕೊಡುವಂತಿತ್ತು. ನಾವು ತರಗತಿಯಲ್ಲಿ ಈ

ಪ್ರಶ್ನೆಗಳ ಮೂಲಕವೇ ಚರ್ಚೆಯನ್ನು ಆರಂಭಿಸಿದ ಅನಂತರ ಮಾನವ ದೇಹದ ಅಂಗರಚನೆ ಮತ್ತದರ ಸ್ವಾಭಾವಿಕ ಕ್ರಿಯೆಗಳ ಬಗ್ಗೆ ಅರಿತುಕೊಂಡು, ಮಾನವ ದೇಹ ರೂಪುಗೊಂಡ ಬಗೆ ಮತ್ತು ಸಂತಾನೋತ್ಪತ್ತಿಯ ಬಗ್ಗೆ ತಿಳಿವಳಿಕೆ ಹೊಂದಲು ಸಾಧ್ಯವಾಯಿತು. ಈ ಶೈಕ್ಷಣಿಕ ಅನುಭವ, ಸಾಂಸ್ಥಿಕ ತರಬೇತಿ ಹಾಗು ಶಾಲೆಯ ಅಗತ್ಯ ಇವೆಲ್ಲವೂ ಕಿಶೋರಾವಸ್ಥೆಯ ಬಗ್ಗೆ ಮಕ್ಕಳಲ್ಲಿ ತರಗತಿಯ ಹೊರಗೆ, ನಿಯಮಿತವಾಗಿ ಚರ್ಚಿಸಲು ನನಗೆ ಪ್ರೋತ್ಸಾಹ ನೀಡಿದವು. ನಮ್ಮ ಶಾಲೆಯು ಈ ಕೆಲಸಕ್ಕೋಸ್ಕರ ಒಬ್ಬ ಶಿಕ್ಷಕ ಹಾಗೂ ಒಬ್ಬ ಶಿಕ್ಷಕಿಯನ್ನು ನಿಯೋಜಿಸಿತು. ನಾವೆಲ್ಲ ಶಾಲೆಯಲ್ಲಿ ಕಿಶೋರ್-ಕಿಶೋರಿ ಮಂಚ್ (ಕಿಶೋರ - ಕಿಶೋರಿ ವೇದಿಕೆ )ಯನ್ನು ರೂಪಿಸಲು ಸಹಾಯ ಮಾಡಿದೆವು. ಮುಖ್ಯವಾಗಿ ಈ ವಾಡಿಕೆಯು ಹಿರಿಯ ಪ್ರಾಥಮಿಕ ತರಗತಿಗಳ ವಿದ್ಯಾರ್ಥಿಗಳೊಂದಿಗೆ ಕೆಲಸ ಮಾಡಿ ಅವರ ಕುತೂಹಲವನ್ನು ತಣಿಸುವ ಹಾಗೂ ಅವರ ಅಗತ್ಯಕ್ಕೆ ತಕ್ಕಂತೆ ಸಾಮಾನ್ಯ ತೊಂದರೆಗಳನ್ನು ನೀಗಿಸುವ ನಿಟ್ಟಿನಲ್ಲಿ ಸಹಾಯ ಮಾಡಿತು.

ಈ ವೇದಿಕೆಯಲ್ಲಿ ಮಕ್ಕಳು ಮುಕ್ತವಾಗಿ ತಮ್ಮ ಪ್ರಶ್ನೆಗಳನ್ನಿಡುತ್ತಾರೆ ಮತ್ತು ಬಹಳ ಸಲ ಅವರಿಗೆ ನೇರವಾದ ಉತ್ತರವನ್ನು ದೊರಕಿಸುವ ಬದಲು, ಅವರಿಗೆ ಕಥೆಗಳು, ವಿಡಿಯೋಗಳು, ಚಿತ್ರಪಟಗಳು ಹಾಗು ಸಂವಾದಗಳ ಮೂಲಕ ಉತ್ತರಗಳನ್ನು ನೀಡಲಾಗುತ್ತದೆ. ಇದೇ ದಿಕ್ಕಿನಲ್ಲಿ ಮುಂದುವರಿದು ನಾವು ಶಿಕ್ಷರು ಮತ್ತು ವಿದ್ಯಾರ್ಥಿಗಳಿಗೋಸ್ಕರ ಕಿಶೋರಾವಸ್ಥೆಯ ಮೇಲೆ ಬರೆದಿರುವಂತಹ ಮೂವತ್ತಕ್ಕೂ ಹೆಚ್ಚು ಪುಸ್ತಕಗಳನ್ನು ಸಂಪಾದಿಸಿದ್ದೇವೆ. ಇವು ನಮ್ಮ ಶಾಲೆಯ ಗ್ರಂಥಾಲಯದಲ್ಲಿ ಸಿಗುತ್ತವೆ. ಈ ಪುಸ್ತಕಗಳನ್ನು ಮೊದಲಿಗೆ ವೇದಿಕೆಯಲ್ಲಿ ಮಕ್ಕಳಿಗೆ ಪರಿಚಯಿಸಲಾಗುತ್ತದೆ, ಅದರ ಅನಂತರ ಮಕ್ಕಳು ಶಾಲೆಯ ಗ್ರಂಥಾಲಯದಿಂದ ಈ ಪುಸ್ತಕಗಳನ್ನು ಓದಲು ಕೊಂಡೊಯ್ಯಬಹುದು. ಈ ಪ್ರಯತ್ನವು ಮಕ್ಕಳಿಗೆ ಈ ವಯಸ್ಸಿನಲ್ಲಿ ಆಗುವ ಶಾರೀರಕ, ಮಾನಸಿಕ ಹಾಗೂ ನಡವಳಿಕೆಯಲ್ಲಾಗುವ ಬದಲಾವಣೆಗಳನ್ನು ಅರ್ಥಮಾಡಿಕೊಳ್ಳಲು ಸಹಾಯ ಮಾಡುತ್ತದೆ ಹಾಗೂ ಅವರ ಸಮಸ್ಯೆಗಳು ಹಾಗೂ ದ್ವಂದಗಳನ್ನು ಪರಿಹರಿಸಿಕೊಳ್ಳಲು ಬೇಕಾದ ಮಾರ್ಗದರ್ಶನವನ್ನು ಕೂಡ ಒದಗಿಸುತ್ತದೆ. ನಾವು ಸುಮಾರು ತಿಂಗಳಲ್ಲಿ 2 ಗಂಟೆಗಳ ಕಾಲ ಮಕ್ಕಳೊಂದಿಗೆ ಕೆಲಸ ಮಾಡುತ್ತೇವೆ. ಇಲ್ಲಿಯವರೆಗೆ ನಾವು 40 ಸಭೆಗಳನ್ನು ನಡೆಸಿದ್ದೇವೆ ಹಾಗೂ ಇತರ ಶಿಕ್ಷಕರೊಡನೆ ಕೂಡ ನಿಯಮಿತವಾದ ಮಾತುಕತೆ ಜಾರಿಯಲ್ಲಿಟ್ಟುಕೊಂಡಿದ್ದೇವೆ. ಈ ಸಭೆಗಳಲ್ಲಿ ಮಾನವ ದೇಹದ ಅಂಗ ರಚನಾ ಶಾಸ್ತ್ರ, ಆರೋಗ್ಯ ಮತ್ತು ಸಮತೋಲಿತ ಆಹಾರ, ಮಕ್ಕಳ ವರ್ತನೆ, ತಾರತಮ್ಯ, ಅಸ್ಪೃಶ್ಯತೆ, ಕಳ್ಳತನ ಹಾಗೂ ಹೆಣ್ಣು ಮಕ್ಕಳ ಅಪಹರಣ, ಆಟದ ಮೈದಾನದಲ್ಲಿ ಗಂಡು ಮತ್ತು ಹೆಣ್ಣುಮಕ್ಕಳು ಒಟ್ಟಿಗೆ ಆಡದೇ ಇರುವುದು, ಗುಂಪುಗಾರಿಕೆ (ಹುಡುಗರು / ಹುಡುಗಿಯರು, ಹುಡುಗಿಯರು / ಹುಡುಗಿಯರು, ಹುಡುಗರು / ಹುಡುಗರು), ನಿಂದನಾತ್ಮಕ ಭಾಷೆಯ ಬಳಕೆ, ಭದ್ರತೆ, ಒತ್ತಡ ಮತ್ತು ಆಶಾಭಂಗ, ಪ್ರಥಮ ಚಿಕಿತ್ಸೆ, ಸ್ವಚ್ಛತೆ, ಮುಟ್ಟಾಗುವುದು ಮತ್ತು ಅದರ

ಮೂಢನಂಬಿಕೆಗಳು ಮತ್ತು ಸಾಮಾಜಿಕ ನಂಬಿಕೆ ಇಂಥ ಸಾಮಾಜಿಕ ಸಮಸ್ಯೆಗಳ ಮೇಲೆ ಚರ್ಚಿಸಲಾಗುತ್ತದೆ.

ಈ ರೀತಿಯಾದ ಕಾರ್ಯ ಯೋಜನೆಯಲ್ಲಿ, ಮಕ್ಕಳು ಇಲ್ಲಿಯವರೆಗೆ ಸುಮಾರು 100 ಪ್ರಶ್ನೆಗಳನ್ನು ಚರ್ಚಿಸಲು ಸಮರ್ಥರಾಗಿದ್ದಾರೆ. ಈ ವೇದಿಕೆಯ ಮೂಲಕ ಹುಡುಗಿಯರಿಗಾಗಿಯೇ ಶಾಲೆಯಲ್ಲಿ ಸಾಮಾನ್ಯ ಕೊಠಡಿಯನ್ನು ಮಾಡಲಾಗಿದ್ದು, ಅಲ್ಲಿ ಅವರಿಗೆ ಅವಶ್ಯಕವಾಗಿರುವಂತಹ ಸ್ಯಾನಿಟರಿ ಪ್ಯಾಡ್, ಬಟ್ಟೆ ಮತ್ತು ಡಸ್ಟ್‌ಬಿನ್‌ಗಳಂತಹ ವಸ್ತುಗಳನ್ನು ಇರಿಸುವ ವ್ಯವಸ್ಥೆಯನ್ನು ಮಾಡಲಾಗಿದೆ. ಇದೇ ರೀತಿ ಹುಡುಗರಿಗೂ ಸಹ ಅವರ ಆವಶ್ಯಕತೆಗಳಿಗನುಸಾರವಾಗಿ ಸಮಾನವಾಗಿ ನೋಡಿಕೊಳ್ಳಲಾಗುತ್ತಿದೆ. ಶಾಲೆಯ ಪ್ರತಿಯೊಂದು ಸಮಸ್ಯೆಗಳು ಕೇವಲ ಹದಿಹರೆಯದವರಿಗೆ ಮಾತ್ರ ಸಂಬಂಧಪಟ್ಟಿರುವುದಾಗಿರುವುದಿಲ್ಲ ಹಾಗೂ ಅವರಿಗೆ ಈ ವೇದಿಕೆಯೊಂದೆ ಏಕೈಕ ಆಯ್ಕೆಯೂ ಆಗಿರುವುದಿಲ್ಲ ಎಂಬುದನ್ನು ಈ ಕೆಲಸದ ಸಮಯದಲ್ಲಿ ನಾವು ಭಾವಿಸಿದೆವು. ಹಾಗಾಗಿ ಪ್ರತಿ ವಾರದ ಗುರುವಾರದಂದು ಮಕ್ಕಳನ್ನು ಖುದ್ದಾಗಿ ಭೇಟಿ ಮಾಡಿ ಕೆಲವು ಸಮಸ್ಯೆಗಳ ಬಗ್ಗೆ ಅವರೊಂದಿಗೆ ಚರ್ಚಿಸುತ್ತೇವೆ ಅಂದರೆ ನೀರು ಮತ್ತು ಆಹಾರವನ್ನು ವ್ಯರ್ಥ ಮಾಡದಿರುವುದು, ಶಾಲೆಯನ್ನು ಸ್ವಚ್ಛವಾಗಿಟ್ಟುಕೊಳ್ಳುವುದು, ಶಾಲೆಯಲ್ಲಿ ಜಗಳ ಅಥವಾ ಕಚ್ಚಾಟ ಮಾಡದಿರುವುದು ಅಥವಾ ಶಾಲೆಗೆ ಮುಖ್ಯವಾದ ಇತರೆ ಯಾವುದೇ ಸಾಮಾನ್ಯ ಸಮಸ್ಯೆಗಳು ಇತ್ಯಾದಿ.

ನೂರಾರು ಮಕ್ಕಳು ಒಡ್ಡಿದ ನೂರಾರು ಪ್ರಶ್ನೆಗಳಲ್ಲಿ ಕೆಲವು ಉದಾಹರಣೆ ಹೀಗಿವೆ:

1) ನಾನು ಯಾರಿಗಾದರೂ ಅವಮಾನ ಏಕೆ ಮಾಡಲು ಪ್ರಯತ್ನಿಸುತ್ತೇನೆ?
2) ಒಂದು ಹುಡುಗಿಯನ್ನು ನೋಡುವಾಗ ನಾವೇಕೆ ನಮ್ಮ ಅಮ್ಮನನ್ನೋ, ಇಲ್ಲ ಅಕ್ಕ ತಂಗಿಯರನ್ನೋ ಕಣ್ಮುಂದೆ ತಂದುಕೊಳ್ಳುವುದಿಲ್ಲ?
3) ನಾವೆಲ್ಲ ಶಾಲೆಯಲ್ಲಿ ಒಂದೇ ಆಗಿರುತ್ತೇವೆ ಆದರೆ ಊರಿನಲ್ಲೇಕೆ ಭೇದಭಾವವಿದೆ?
4) ಮನೆಕೆಲಸವನ್ನು ಹುಡುಗಿಯರೇ ಏಕೆ ಮಾಡಬೇಕು? ಹುಡುಗರು ಏಕೆ ಮಾಡಬಾರದು?
5) ಹುಡುಗಿಯರೇಕೆ ಮುಟ್ಟಾಗುತ್ತಾರೆ? ಮಗುವಾಗುವುದಕ್ಕೂ ಮುಟ್ಟಾಗುವುದಕ್ಕೂ ಏನು ಸಂಬಂಧ?
6) ತೃತೀಯ ಲಿಂಗೀಯ ಎಂದರೆ ಹೆಣ್ಣೋ ಗಂಡೋ?
7) ಜನ ಏಕೆ ನಶೆಯ ಪದಾರ್ಥಗಳಿಗೆ ದಾಸರಾಗುತ್ತಾರೆ? ಏಕೆ ಅವರು ಬೀಡಿ ಇಲ್ಲ ತಂಬಾಕನ್ನು ಸದಾ ಕಾಲ ಉಪಯೋಗಿಸುತ್ತಾರೆ?
8) ಹುಡುಗ ಹುಡುಗಿಯರೇಕೆ ಒಬ್ಬರ ಪಕ್ಕ ಇನ್ನೊಬ್ಬರು ಕೂರಲು ಬಯಸುವುದಿಲ್ಲ? ಚಿಕ್ಕ ಮಕ್ಕಳು ಹೀಗೆ ಮಾಡುವುದಿಲ್ಲವಲ್ಲ?
9) ನನಗೆ ಓದಲು ಬರುವುದಿಲ್ಲ. ಅದಕ್ಕಾಗಿ ಎಲ್ಲರೂ ನನ್ನನ್ನೇಕೆ ಅಣಕಿಸುತ್ತಾರೆ?

10) ನ್ಯಾಯಾಲಯದ ಮದುವೆಗಳೇಕೆ ಆಗುತ್ತವೆ?

ಕಿಶೋರಾವಸ್ಥೆಗೆ ಸಂಬಂಧಪಟ್ಟ ಇದುವರೆಗೂ ಎತ್ತಿಕೊಳ್ಳದ ವಿಷಯಗಳ ಬಗ್ಗೆ ಚರ್ಚಿಸುವ ಹಾಗೂ ಸಂವಾದಿಸುವ ಈ ರೀತಿಯ ಮುಕ್ತ ವಾತಾವರಣ ಮಕ್ಕಳಿಗೆ ತಮ್ಮದೇ ಆದ ನಿರ್ಧಾರಗಳನ್ನು ತೆಗೆದುಕೊಳ್ಳಲು, ನಾಯಕತ್ವದ ಗುಣಗಳನ್ನು ಬೆಳೆಸಿಕೊಳ್ಳಲು, ತಮ್ಮ ದೇಹದ ಬಗ್ಗೆ ಅರಿವು ಮೂಡಿಸಿಕೊಳ್ಳಲು ಹಾಗೂ ಪ್ರಜಾಪ್ರಭುತ್ವದ ಸಮಾನತೆಯ ಮೌಲ್ಯಗಳನ್ನು ಅರ್ಥಮಾಡಿಕೊಳ್ಳಲು ಸಹಾಯಮಾಡುತ್ತವೆ ಎಂದು ನನಗನಿಸುತ್ತದೆ. ಮಕ್ಕಳೊಂದಿಗೆ ಈ ವಿಷಯವಾಗಿ ಸುಮಾರು ಅನುಭವಗಳಾಗಿವೆ, ಅದರಲ್ಲಿ ಕೆಲವನ್ನು ವಿಶೇಷವಾಗಿ ಪ್ರಸ್ತಾಪಿಸಲು ಬಯಸುತ್ತೇನೆ .

**ಪ್ರಸಂಗ 1**. ಹುಡುಗಿಯೊಬ್ಬಳಿಗೆ ಕ್ರಮವಾಗಿ ಮುಟ್ಟಾಗದೆ ಇದ್ದುದರಿಂದ ಅವಳನ್ನು 'ಟೋನ - ಟೋಟಕ' (ಒಂದು ರೀತಿಯ ಮಾಟ ಮಂತ್ರ) ಕ್ಕೆ ಒಳಪಡಿಸಲಾಗಿತ್ತು ಮತ್ತು ಅವಳ ಕುಟುಂಬ ಮತ್ತು ಅವರ ನೆರೆಹೊರೆಯವರೆಲ್ಲ ನಂಬುತ್ತಿದ್ದ ಕಾರಣ ಪದೇ ಪದೇ 'ಬಾಬಾ'ಗಳಿದ್ದಲ್ಲಿ ಹೋಗಿಬರುವುದು ನಡೆಯುತ್ತಿತ್ತು. ಈ ಹುಡುಗಿಯು ತನ್ನ ತೊಂದರೆಯನ್ನು ಹಂಚಿಕೊಂಡಿದ್ದರಿಂದ ಅವಳಿಗೆ ಸೂಕ್ತವಾದ ಸಹಕಾರ ನೀಡಲಾಯಿತು. ನಾವು ಅವಳ ತಾಯಿಯೊಡನೆ ಮಾತಾಡಿ ವೈದ್ಯಕೀಯ ನೆರವನ್ನು ಪಡೆಯಲು, ಅದರ ಮೂಲಕ ಪೂರಕ ಫಲಿತಾಂಶವನ್ನು ಪಡೆಯಲು ಪ್ರೋತ್ಸಾಹಿಸಿದೆವು. ಇದರಲ್ಲಿ ಹೇಳಲೇಬೇಕಾದ ಅಂಶವೇನೆಂದರೆ ಆ ಹುಡುಗಿ ಬಾಲ್ಯ ವಿವಾಹವನ್ನು ವಿರೋಧಿಸಿ ತನ್ನ ಸಮಾಜವು ಹೊಸ ರೀತಿಯ ಯೋಚನ ಶೈಲಿಗೆ ಒಗ್ಗಿಕೊಳ್ಳುವಂತೆ ಮಾಡಿದಳು. ಇಲ್ಲಿರುವ ಪ್ರಶ್ನೆಯೇನೆಂದರೆ ಸಮಾಜದಲ್ಲಿ ಎಷ್ಟು ಹುಡುಗಿಯರಿಗೆ ಈ ರೀತಿ ತಮ್ಮ ಭಾವನೆಗಳನ್ನು ಹಂಚಿಕೊಂಡು ಜನ ಅದನ್ನು ಅರ್ಥಮಾಡಿಕೊಳ್ಳುವಂತಹ ವೇದಿಕೆ ಒದಗಿಸಲಾಗುತ್ತದೆ?

**ಪ್ರಸಂಗ-2**. ತನ್ನ ದೇಹದಲ್ಲಿ ಬದಲಾವಣೆಗಳಾಗುತ್ತಿದ್ದ ಸಂದರ್ಭದಲ್ಲಿ ಒಬ್ಬ ಹುಡುಗನಿಗೆ ತನ್ನ ಎದೆಯ ಮೇಲೆ (ನಿಪ್ಪಲ್) ನೋವುಳ್ಳ ಒಂದು ಗಂಟಿದ್ದುದರಿಂದ, ತನಗೆ ಏನೋ ರೋಗವಿದೆ ಎನಿಸಿ ಅವನು ಬಹಳ ಒತ್ತಡಕ್ಕೊಳಗಾಗಿದ್ದ. ಈ ಹುಡುಗನಿಗೆ ಕ್ಯಾನ್ಸರ್ ಆದರೆ ಹೀಗಾಗುತ್ತದೆ ಎಂದು ಗೊತ್ತಿತ್ತು. ಆದ್ದರಿಂದ ಅವನಿಗೆ ಅವನದ್ದೇ ವಯಸ್ಸಿನ ಇತರ ಹುಡುಗರೊಡನೆ ಈ ವಿಷಯವನ್ನು ಹಂಚಿಕೊಂಡು ಅವರಿಗೂ ಇಂಥದ್ದೇ ಸಮಸ್ಯೆ ಎದುರಾಗಿತ್ತೇ ಎಂಬುದನ್ನು ಕಂಡುಹಿಡಿಯಲು ಹೇಳಲಾಯಿತು. ಒಂದು ವೇಳೆ ಸಮಸ್ಯೆಯೇನಾದರೂ ಇದ್ದಲ್ಲಿ ವೈದ್ಯರನ್ನೇಕೆ ಸಂಪರ್ಕಿಸಬಾರದು? ಈ ಸೂಕ್ಷ್ಮ ಅವಧಿಯನ್ನು ನಮ್ಮಿಂದ ಮರೆಯಲು ಸಾಧ್ಯವೇ?

**ಪ್ರಸಂಗ-3**. ನಾವು ಬಹಳಷ್ಟು ಸಲ ಮಕ್ಕಳು ಒರಟಾಗಿ, ಅವಿಧೇಯತೆಯಿಂದ ವರ್ತಿಸುವುದರ ಬಗ್ಗೆ ಮಾತನಾಡುತ್ತೇವೆ. ಆದರೆ ಇದರಲ್ಲಿ ಮುಖ್ಯವಾದ ಅಂಶವೇನೆಂದರೆ ಅವರೇಕೆ ಹಾಗೆ ವರ್ತಿಸುತ್ತಾರೆ? ಎಂಬ ಕಾರಣ ತಿಳಿದುಕೊಳ್ಳುವುದು ಬಹಳ ಮುಖ್ಯವಾಗಿದೆ. ಮತ್ತು ಎಲ್ಲ ಮಕ್ಕಳು ಕೂಡ

ಹೀಗೇ ವರ್ತಿಸುತ್ತಾರೆಯೇ? ಪ್ರಾಯಃ ಇಲ್ಲ. ನಮ್ಮ ಶಾಲೆಯಲ್ಲಿ ಒಬ್ಬ ಹುಡುಗ ತನ್ನ ಅಜ್ಜ-ಅಜ್ಜಿಯರೊಡನೆ ಇರುತ್ತಿದ್ದ. ಅವನು ತನ್ನ ಕೈಯ ಧಮನಿಗಳನ್ನು ಕುಯಿದುಕೊಳ್ಳಲು ಪ್ರಯತ್ನಿಸಿದ, ಆದರೆ ಯಶಸ್ವಿಯಾಗಲಿಲ್ಲ. ಅವನೊಡನೆ ನಡೆಸಿದ ವೈಯಕ್ತಿಕ ಮಾತುಕತೆಯಲ್ಲಿ ನಮಗೆ ತಿಳಿದುಬಂದಿದ್ದೇನೆಂದರೆ ತನ್ನೊಡನೆ ನಿರಂತರವಾಗಿ ನಿರ್ದಯತೆಯಿಂದ ವರ್ತಿಸುತ್ತಿದ್ದ ತನ್ನ ಕುಟುಂಬದವರಿಂದ, ಗೆಳೆಯರಿಂದ ಮತ್ತು ನೆರೆಹೊರೆಯವರಿಂದ ಅವನು ರೋಸಿಹೋಗಿದ್ದ. ಪದೇ ಪದೇ ಮರುಕಳಿಸುತ್ತಿದ್ದ ಭಾವನಾತ್ಮಕ ಅಸಮತೋಲನ ಅವನನ್ನು ದುಃಖಕ್ಕೀಡು ಮಾಡಿ, ಅದಕ್ಕೆ ಕಟ್ಟಕಡೆಯ ಪರಿಹಾರವೆಂಬಂತೆ ಅವನು ಇಂಥ ವಿಪರೀತದ ಹೆಜ್ಜೆಯಿಡುವುದಕ್ಕೆ ಮುಂದಾಗಿದ್ದ. ಚಿಂತಿಸಬೇಕಾದ ವಿಚಾರವೇನೆಂದರೆ ನಾವು ಪೂರ್ವಗ್ರಹ ಪೀಡಿತ ನಿರ್ಧಾರಗಳನ್ನು ಕೊಂಚವೂ ಹಿಂಜರಿಯದೆ ತೆಗೆದುಕೊಂಡು ಬಿಡುತ್ತೇವೆ ಮತ್ತು ಮಕ್ಕಳ ಇಂಥಹ ತೀವ್ರ ಕ್ರಿಯೆಗಳ ಹಿಂದೆ ಇರಬಹುದಾದ ನಿಜವಾದ ಕಾರಣಗಳನ್ನು ಅರಿಯುವುದರ ಬಗ್ಗೆ ಆಸಕ್ತಿಯನ್ನೇ ತೋರುವುದಿಲ್ಲ .

**ಪ್ರಸಂಗ-4**. ಎಂಟನೇ ತರಗತಿ ಮುಗಿಸಿದ್ದ ಈ ವಿದ್ಯಾರ್ಥಿನಿಗೆ ನಾಲ್ಕು ತಂಗಿಯರಿದ್ದು ಇವಳೇ ಎಲ್ಲರಿಗಿಂತ ಹಿರಿಯಳಾಗಿದ್ದು, ತನ್ನ ತಂದೆತಾಯಿಗಳಿಗೆ ತರಕಾರಿ ಗಾಡಿಯಲ್ಲಿ ತರಕಾರಿ ಜೋಡಿಸಿಡಲು ನೆರವಾಗುತ್ತಿದ್ದಳು. ಕಳೆದ ಎರಡು ಮೂರು ವರ್ಷಗಳಿಂದ ಇವಳು ತೀವ್ರ ಹೊಟ್ಟೆನೋವಿನಿಂದ ಬಳಲುತ್ತಿದ್ದುದರಿಂದ ಶಾಲೆಯನ್ನು ಬಿಡಲು ಇಚ್ಛಿಸಿದ್ದಳು. ಆದರೆ ಅವಳ ಕುಟುಂಬ ಅವಳಿಗೆ ಯಾವುದೇ ರೀತಿಯ ವೈದ್ಯಕೀಯ ಸಹಾಯವನ್ನೊದಗಿಸುವಲ್ಲಿ ಆಸಕ್ತಿ ತೋರಿರಲಿಲ್ಲ. ಅವಳ ಪ್ರಕಾರ, ತನ್ನ ಗೆಳೆಯರೆದುರು ಅಥವಾ ತನ್ನ ತಂದೆ ತಾಯಿಗಳೆದುರು ತನ್ನ ಹೊಟ್ಟೆ ನೋವನ್ನು ದೊಡ್ಡ ವಿಷಯವನ್ನಾಗಿ ಮಾಡಲು ಇಚ್ಚಿಸಿರಲಿಲ್ಲ, ಆ ಕಾರಣ ಅವಳು ಬಹಳ ವ್ಯಾಕುಲಳಾಗಿದ್ದಳು. ಆಶ್ಚರ್ಯವೆಂದರೆ ಅವಳು ಆಟದ ಮೈದಾನದಲ್ಲಾಗಲೀ ಅಥವಾ ಶಾಲೆಗೆ ಸಂಬಂಧಪಟ್ಟ ಇನ್ನಾವುದೇ ಚಟುವಟಿಕೆಯಲ್ಲಾಗಲೀ ತನ್ನ ಈ ಪರಿಸ್ಥಿತಿಯ ಬಗ್ಗೆ ಯಾರಿಗೂ ಒಂದು ಸುಳಿವು ಕೂಡ ಕೊಟ್ಟಿರಲಿಲ್ಲ. ಶಾಲೆಯನ್ನು ಅರ್ಧಕ್ಕೆ ಬಿಡಲು ಇಂಥಹ ಹಲವು ಕಾರಣಗಳು ಇದ್ದಿರುತ್ತವೆ ಎಂಬುದಂತೂ ವಿದಿತ ಹಾಗೂ ಇಂಥ ಸಣ್ಣ ಸಣ್ಣ ಕಾರಣಗಳೇ ಹದಿ-ಹರೆಯ ವಯಸ್ಸಿನ ಹುಡುಗ ಹುಡುಗಿಯರನ್ನು ಇಂಥಹ ನಿರ್ಧಾರಗಳನ್ನು ತೆಗೆದುಕೊಳ್ಳಲು ಪ್ರೇರೇಪಿಸುತ್ತವೆ.

**ಪ್ರಸಂಗ-5**. ಏಳು ಮತ್ತು ಎಂಟನೆಯ ತರಗತಿಯ ಹುಡುಗ - ಹುಡುಗಿಯರ ಮಧ್ಯ ಏನೋ ಮನಸ್ತಾಪ ಉಂಟಾಗಿ ಅವರು ಒಬ್ಬರೊಡನೆ ಇನ್ನೊಬ್ಬರು ಅಷ್ಟಾಗಿ ಮಾತನಾಡುತ್ತಿರಲಿಲ್ಲ. ಅದೇ ಕಾರಣಕ್ಕಾಗಿ ಅವರು ಮೈದಾನದಲ್ಲಿ ಒಟ್ಟಿಗೆ ಆಟವನ್ನು ಸಹ ಆಡುತ್ತಿರಲಿಲ್ಲ ಹಾಗೂ ತರಗತಿಯಲ್ಲಿ ಕಲಿಸುವ ವೇಳೆಯೂ ಏನೋ ಕಲಹ ನಡೆದಿತ್ತು. ಶಾಲೆಯಲ್ಲಿ ವಾರ್ಷಿಕ ಕ್ರೀಡಾಕೂಟದ ವಾರವನ್ನು ಆಯೋಜಿಸುವುದಿತ್ತು. ಹುಡುಗರ ಮತ್ತು ಹುಡುಗಿಯರ ಗುಂಪಿನ

ನಡುವೆ ಒಗ್ಗಟ್ಟು ಇಲ್ಲದೆ ಹೋಗಿದ್ದು, ಸಂಘರ್ಷವಿದ್ದಿದ್ದು ನನಗೆ ನಿಚ್ಚಳವಾಗಿ ಕಾಣುತ್ತಿತ್ತು. ನಾನು ಶಾಲೆಯ ಕ್ರೀಡಾ ಮಂಡಳಿಯ ಸದಸ್ಯನಾಗಿದ್ದು, ಕ್ರೀಡಾಕೂಟದ ವೇಳಾಪಟ್ಟಿಯನ್ನು ತಯಾರಿಸಬೇಕಾಗಿತ್ತು. ನಮ್ಮ ಕಡೆಯಿಂದ ಕಬಡ್ಡಿ ಆಟಕ್ಕೆ 12 ತಂಡಗಳನ್ನು ರಚಿಸುವ ಬದಲು, ನಾವು ಮಕ್ಕಳಿಗೆ ತಮ್ಮದೇ ತಂಡಗಳನ್ನು ರಚಿಸಿಕೊಳ್ಳುವ ಅವಕಾಶವನ್ನು ಕೊಟ್ಟೆವು. ಪ್ರತಿ ತಂಡದಲ್ಲಿಯೂ ಸಮ ಸಂಖ್ಯೆಯ ಹುಡುಗ -ಹುಡುಗಿಯರಿರಬೇಕೆಂದು ಮೊದಲೇ ತಿಳಿಸಿದ್ದೆವು. ಇದರ ಫಲಿತಾಂಶ ಕೊಂಚ ವ್ಯತಿರಿಕ್ತವಾಗಿತ್ತು. ಆರು ಹುಡುಗರು ಮತ್ತು ಆರು ಹುಡುಗಿಯರ ನಾಯಕತ್ವದಲ್ಲಿ ನಡೆದ ಒಂದು ಭರ್ಜರಿ ಶಕ್ತಿಭರಿತ ಆಟಕ್ಕೆ ನಾವೆಲ್ಲ ಸಾಕ್ಷಿಯಾದೆವು. ಅಂತಿಮ ಸುತ್ತಿನ ಪಂದ್ಯದಲ್ಲಿ ಹುಡುಗರು ಮತ್ತು ಹುಡುಗಿಯರು ಒಟ್ಟಿಗೆ ಕೂತು ತಮ್ಮ ತಮ್ಮ ತಂಡಗಳನ್ನು ಪ್ರೋತ್ಸಾಹಿಸಿದರು ಹಾಗೂ, ಹುಡುಗಿಯರ ನಾಯಕತ್ವದಲ್ಲಿ ಹುಡುಗರು ತಮ್ಮ ತಂಡಕ್ಕೋಸ್ಕರ ಖುಷಿಯಾಗಿ ಆಟವಾಡಿದರು. ಇಲ್ಲಿ ನಾನು ಹೇಳಬೇಕೆಂದಿರುವ ಅಂಶವೇನೆಂದರೆ ಶಿಕ್ಷಕರಾಗಿ ನಮಗೆ ಹಲವು ಅವಕಾಶಗಳು ಕೂಡಿ ಬರುತ್ತವೆ, ಅವುಗಳನ್ನು ನಾವು ಹೇಗೆ ಬಳಸಿಕೊಳ್ಳುತ್ತೇವೆ ಎಂಬುದು ಸಂಪೂರ್ಣವಾಗಿ ನಮ್ಮ ಮೇಲೆಯೇ ಅವಲಂಬಿತವಾಗಿರುತ್ತದೆ. ಆಟದ ಮೈದಾನವು ಅಂತರವನ್ನು ಹೋಗಲಾಡಿಸುತ್ತದೆ.

ಈ ವೇದಿಕೆಯು ಸಕಲ ಸಮಸ್ಯೆಗಳಿಗೂ ರಾಮಬಾಣ ಎಂದು ನಾನು ಹೇಳಲಾರೆ ಆದರೆ ಒಂದು ಮಾತ್ರ ಖಚಿತ. ಈ ರೀತಿಯ ಆವಿಷ್ಕಾರಗಳನ್ನು ಹೊರತರುವುದು, ಮತ್ತು ಅಗತ್ಯ ಬಿದ್ದಾಗಲೆಲ್ಲ, ಶೈಕ್ಷಣಿಕ ಸಂದರ್ಭಗಳನ್ನು ಬದಲಾಯಿಸುವುದು ಖಂಡಿತವಾಗಿಯೂ ಶಾಲೆಯದೇ ಜವಾಬ್ದಾರಿಯಾಗಿದೆ. ಈ ಪ್ರಯತ್ನವು ವಿದ್ಯಾರ್ಥಿ -ಕೇಂದ್ರಿತ, ಎಲ್ಲವನ್ನೂ ಒಳಗೊಳ್ಳುವ ಹಾಗೂ ಲಭ್ಯವಿರುವ ಶಿಕ್ಷಣದತ್ತ ಸಾಗಲು ಸಹಾಯ ಮಾಡುತ್ತದೆ ಎಂದು ಹೇಳಿಕೊಳ್ಳಲು ನಮಗೆ ಅತೀವ ಸಂತೃಪ್ತಿಯಾಗುತ್ತದೆ. ಕಸ್ತೂರ್ಬಾ ಗಾಂಧಿ ವಸತಿ ಶಾಲೆಗಳು, ಕೇಂದ್ರೀಯ ವಿದ್ಯಾಲಯಗಳು ಮತ್ತು ನವೋದಯ ಶಾಲೆಗಳು UNICEFನೊಂದಿಗೆ ಜೊತೆಗೂಡಿ ಈ ನಿಟ್ಟಿನಲ್ಲಿ ಕೆಲಸ ಮಾಡುತ್ತಿವೆ. ಇದಲ್ಲದೆ, NCERT ಕೂಡ ಕಿಶೋರಾವಸ್ಥೆಯನ್ನು ಪಠ್ಯಕ್ರಮದ ಒಂದು ಭಾಗವನ್ನಾಗಿ ಮಾಡಲು ಹೆಜ್ಜೆಯಿಟ್ಟಿದೆ. ಆದರೆ ಇದರಲ್ಲಿ ಅತಿ ಮುಖ್ಯವಾದ ವಿಷಯವೇನೆಂದರೆ ಶಿಕ್ಷಕರು ಇದರಲ್ಲಿ ಅತಿ ನಿರ್ಣಾಯಕ ಪಾತ್ರ ವಹಿಸುತ್ತಾರೆ ಏಕೆಂದರೆ ಶಿಕ್ಷಕ/ಶಿಕ್ಷಕಿಯು ವಿವೇಚನೆಯುಳ್ಳವರಾಗಿದ್ದು ನಿಷ್ಪಕ್ಷಪಾತಿ-ಯಾಗಿರಬೇಕಾಗುತ್ತದೆ. ಹಾಗು ಮಕ್ಕಳ ಎದುರು ನೈತಿಕ ಮೌಲ್ಯಗಳಿಗೆ ಬದ್ಧರಾಗಿರಬೇಕಾಗುತ್ತದೆ. ನಿಜ ಜೀವನದಲ್ಲಿ ಇದು ವಿರಳ ಆದರೆ ಅಸಾಧ್ಯವೇನಲ್ಲ. ಇದನ್ನು ಖಂಡಿತ ಸಾಧಿಸಬಹುದು. ಮನಃಶಾಸ್ತ್ರಜ್ಞರ ಪ್ರಕಾರ ಕಿಶೋರಾವಸ್ಥೆಯ ಹಂತವು ಅತ್ಯಂತ ಕಷ್ಟಕರವಾಗಿದ್ದು, ಒತ್ತಡ ಹಾಗೂ ಪ್ರಕ್ಷುಬ್ಧತೆಯಿಂದ ತುಂಬಿದ್ದರೂ ಈ ರೀತಿಯ ಪ್ರಯತ್ನಗಳು ಕೊಂಚವಾದರೂ ಆ ಸ್ಥಿತಿಯನ್ನು ಸುಲಭಗೊಳಿಸಲು ಸಹಾಯ ಮಾಡಬಹುದು. ಇದು ಬಹಳ ಮುಖ್ಯ. ಏಕೆಂದರೆ ಒಂದು ಮಗು ಚಿಕ್ಕವಳಿದ್ದಾಗ ತನ್ನ ತಂದೆ ತಾಯಿಯರನ್ನು ಬಹಳ ಹಚ್ಚಿಕೊಂಡಿರುತ್ತಾಳೆ ಆದರೆ ಅವಳು ದೊಡ್ಡವಳಾದಂತೆ ಸ್ವಲ್ಪ ಅಂತರ

ಬಂದುಬಿಡುತ್ತದೆ. ಹಾಗಾಗಿ ಒಬ್ಬ ಶಿಕ್ಷಕರಾಗಿ ನಾವು ಅವರನ್ನು ಭಾವನಾತ್ಮಕವಾಗಿ ಸಶಕ್ತಗೊಳಿಸಿ ಅವರೆಡೆಗೆ ಸಂವೇದನಾಶೀಲರಾಗಬಹುದೇ? ಅದೂ ಎಂಥ ಸಮಯದಲ್ಲಿ, ಅವರಿಗೆ ತಮ್ಮ ತಂದೆತಾಯಿಗಳ ಅಥವಾ ತಮ್ಮ ಭಾವನೆಗಳನ್ನು ಅರ್ಥಮಾಡಿಕೊಳ್ಳುವ ಯಾರಾದರೂ ಜನರ ಅವಶ್ಯಕತೆ ಅತೀ ಹೆಚ್ಚಿರುವ ಸಂದರ್ಭದಲ್ಲಿ. ಮಿಷನ್ ಜೀನಿಯಸ್ ಮೈಂಡ್ ಎಂಬ ಮಕ್ಕಳ ವರ್ತನೆಗೆ ಸಂಬಂಧಿಸಿದ ಒಂದು ಸಂಸ್ಥೆಯ ಪ್ರಧಾನ ಭಾಷಣಕಾರರ ಪ್ರಕಾರ, ಮಾತಿನ ಪರಿಣಾಮ ಅಣು ಬಾಂಬ್ ಗಿಂತಲೂ ಹೆಚ್ಚಿನದು. ಒಂದು ಮಗುವಿಗೆ ಅವನು ಸೋಮಾರಿ, ಯಾವ ಕೆಲಸವನ್ನೂ ಸರಿಯಾಗಿ ಮಾಡಲಾರ ಎಂದು ಪದೇ ಪದೇ ಹೇಳುತ್ತಲೇ ಇದ್ದರೆ ಅವನು ಸೋಮಾರಿಯೇ ಆಗುತ್ತಾನೆ ಮತ್ತು ಅವನಿಂದ ಯಾವ ಕೆಲಸವೂ ಸರಿಯಾಗಿ ಆಗಲು ಸಾಧ್ಯವೇ ಇಲ್ಲ, ಅದೂ ಕಿಶೋರಾವಸ್ಥೆಯಲ್ಲಿ ಹೀಗಾಗುವುದು ಹೆಚ್ಚು. ತಂದೆತಾಯಿಗಳು ತಮಗೆ ಅರಿವಿಲ್ಲದೆ ಬಹಳ ಸಲ ಇಂಥ ಭಾಷೆಯನ್ನು ಉಪಯೋಗಿಸುತ್ತಾರೆ ಎಂಬುದನ್ನು ಅರ್ಥ ಮಾಡಿಕೊಳ್ಳಬೇಕು. ಇದು ತಪ್ಪೆಂದು ಅವರಿಗೆ ಅರಿವಾಗುತ್ತದೆಯೇ? ಈ ವಿಷಯಗಳನ್ನು ಶಿಕ್ಷಕರು ಮತ್ತು ಪೋಷಕರ ಸಭೆಗಳಲ್ಲಿ ಚರ್ಚಿಸಬಹುದು. ಕಿಶೋರಾವಸ್ಥೆಯ ವೇದಿಕೆಯ ಬಗ್ಗೆ ಅವರಿಗೆ ತಿಳಿಸಿಕೊಡಬೇಕು ಹಾಗೂ ಶಾಲೆಯ ಈ ವೇದಿಕೆಯಲ್ಲಿ ಮಕ್ಕಳೊಂದಿಗೆ ನಡೆಯುತ್ತಿರುವ ಕೆಲಸಗಳ ಬಗ್ಗೆ ಅರಿವು ಮೂಡಿಸಬೇಕು. ಈ ಸಂಗತಿಗಳನ್ನು ಬಹಳ ವಿವೇಚನೆಯಿಂದ, ಜಾಗರೂಕತೆಯಿಂದ ಹೇಳಬೇಕು. ನಾವು ಮಕ್ಕಳ ಬೆಳವಣಿಗೆಯಲ್ಲಿ ತಾಯಂದಿರ ಪಾತ್ರ ಸರಿಯಾಗಿರಲೆಂದು ತಾಯಿಯರೊಂದಿಗೆ ಕೂಡ ಪ್ರತ್ಯೇಕವಾಗಿ ಮಾತಾಡಲು ಪ್ರಯತ್ನಿಸುತ್ತೇವೆ.

ಕಿಶೋರಾವಸ್ಥೆ ಬದಲಾವಣೆಯ ವಯಸ್ಸು. ಮಕ್ಕಳು ತಮ್ಮ ಬಾಲ್ಯಾವಸ್ಥೆಯಿಂದ ಪ್ರೌಢಾವಸ್ಥೆಗೆ ತಲಪುವ ನಡುವಲ್ಲಿ ಬಹಳ ಬದಲಾವಣೆಗೊಳಗಾಗುತ್ತಾರೆ ಎಂಬುದನ್ನು ಅರ್ಥಮಾಡಿಕೊಳ್ಳಬೇಕು. ಕೆಲವು ಸಂದರ್ಭಗಳಲ್ಲಿ ಅವರು ಪ್ರೌಢರಂತೆ ವರ್ತಿಸುತ್ತಾರೆ ಹಾಗೂ ಸಮಾಜದಲ್ಲಿ ಅವರ ಅಸ್ಮಿತೆಯ ಹುಡುಕಾಟ ಹದಿಹರೆಯದಿಂದಲೇ ಶುರುವಾಗುತ್ತದೆ. ಅವರು ತಾವು ವಹಿಸಬೇಕಾಗಿರುವ ಪಾತ್ರವನ್ನು ಕುರಿತು ಗೊಂದಲದಲ್ಲಿ ಇರುತ್ತಾರೆ. ಪ್ರೌಢತೆಯೆಡೆಗೆ ಬೆಳೆಯುತ್ತಿರುವವರಾಗಿ ಅವರು ಜವಾಬ್ದಾರಿಯುತವಾಗಿದ್ದರೂ ಅವರ ಆಸೆಗಳಿನ್ನೂ ಬಾಲ್ಯಾವಸ್ಥೆಯದ್ದೇ ಆಗಿರುತ್ತವೆ. ಅವರು ದೊಡ್ಡವರ ಎದುರು ತಮ್ಮ ಯೋಚನೆಗಳನ್ನು ಪ್ರಸ್ತುತಪಡಿಸದೆ ಹೋದರೆ ಅವರಿನ್ನೂ ಚಿಕ್ಕವರೆಂಬ ಮಾತು ಕೇಳಿಬರುತ್ತದೆ. ಹಾಗೂ ಅವರು ಚಿಕ್ಕವರಂತೆ ವರ್ತಿಸಿದರೆ ಅವರು ಈಗ ಚಿಕ್ಕವರಾಗಿ ಉಳಿದಿಲ್ಲವೆಂದೂ, ತಮ್ಮ ನಡತೆಯನ್ನು ಸುಧಾರಿಸಿಕೊಳ್ಳಬೇಕೆಂದೂ ಹೇಳಲಾಗುತ್ತದೆ. ಸತ್ಯ ಏನೆಂದರೆ ಅವರು ಬಹಳ ಗೊಂದಲದಲ್ಲಿರುತ್ತಾರೆ ಹಾಗೂ ತಾವು ದೊಡ್ಡವರೊ, ಚಿಕ್ಕವರೊ ಅಥವಾ ಎರಡೂ ಅಲ್ಲವೋ ಎಂಬುದನ್ನು ಅರ್ಥವೇ ಮಾಡಿಕೊಳ್ಳಲಾರದೆ ಹೋಗುತ್ತಾರೆ.

**ಸ್ವೀಕೃತಿ:**

ನನ್ನ ಕೆಲಸ ಹಾಗೂ ಬರವಣಿಗೆಯಲ್ಲಿ ಪ್ರಶಂಸನೀಯವಾಗಿ ಬೆಂಬಲ ನೀಡಿದ ನನ್ನ ಎಲ್ಲ ಸಹೋದ್ಯೋಗಿಗಳಿಗೂ ನಾನು ಧನ್ಯವಾದ ಹೇಳಲು ಬಯಸುತ್ತೇನ.

**ನೇಮರಾಮ್** ಅವರು ಕಳೆದ 6 ವರ್ಷಗಳಿಂದ ಅಜೀಮ್ ಪ್ರೇಮ್ ಜಿ ಶಾಲೆಯಲ್ಲಿ ವಿಜ್ಞಾನವನ್ನು ಕಲಿಸುತ್ತಿದ್ದು ಕಳೆದ ನಾಲ್ಕು ವರ್ಷಗಳಿಂದ ಹದಿಹರೆಯದ ವೇದಿಕೆಯಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಾ ಬಂದಿದ್ದಾರೆ. ಅವರು ಶಾಲೆಯಲ್ಲಿ ಪ್ರಥಮ ಚಿಕಿತ್ಸೆಯ ಸೌಲಭ್ಯವನ್ನು ಕೊಡುವುದರ ಜವಾಬ್ದಾರಿಯನ್ನು ಕೂಡ ವಹಿಸಿಕೊಂಡಿರುತ್ತಾರೆ. ಅಜೀಮ್ ಪ್ರೇಮ್ ಜಿ ಶಾಲೆಯನ್ನು ಸೇರುವುದಕ್ಕೂ ಮೊದಲು, ಇವರು ಕಾಲೇಜೊಂದರಲ್ಲಿ 4 ವರ್ಷಗಳ ಕಾಲ ರಸಾಯನಶಾಸ್ತ್ರವನ್ನು ಕಲಿಸಿದ್ದರು.

ಅವರನ್ನು nemaram.choudhary@azimpremjifoundation.org ಇಮೇಲ್ ಐಡಿಯ ಮೂಲಕ ಸಂಪರ್ಕಿಸಬಹುದು.